# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪಶ್ನೆ ಸಂಖ್ಯೆ : 703 (803)

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 20.12.2021

ಉತ್ತರಿಸಬೇಕಾದವರು : ಮಾನ್ಯ ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಜನರು ಕುಡಿದ ಮದ್ಯದ ಪ್ಲಾಸ್ಟಿಕ್ ಪ್ಯಾಕ್ ಮತ್ತು ಗಾಜಿನ ಬಾಟಲ್‌ಗಳನ್ನು ಎಲ್ಲೆಂದರಲ್ಲಿ ರೈತರ ಜಮೀನಿನಲ್ಲಿ, ದಾರಿ ಪಕ್ಕದಲ್ಲಿ, ಕೆರೆಗಳಲ್ಲಿ ಬಿಸಾಡುತ್ತಾರೆ, ಇದರಿಂದ ಮಣ್ಣು ಮತ್ತು ಪರಿಸರ ಕಲುಷಿತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಸರ್ಕಾರದ ಗಮನಕ್ಕೆ ಬಂದಿದೆ. |
| (ಆ) | ಬಂದಿದ್ದಲ್ಲಿ, ಸರ್ಕಾರ ಈ ಪ್ಲಾಸ್ಟಿಕ್ ಮತ್ತು ಗಾಜಿನ ಬಾಟಲ್‌ಗಳನ್ನು ಮರುಬಳಕೆ ಮಾಡಿ ಪರಿಸರಕ್ಕಾಗುವ ತೊಂದರೆಯನ್ನು ತಡೆಯುವ ಪ್ರಯತ್ನವನ್ನು ಮಾಡುತ್ತಿದೆಯೇ; ಮಾಡದಿದ್ದಲ್ಲಿ ಕಾರಣಗಳೇನು; ಯಾವ ಕಾಲಮಿತಿಯೊಳಗೆ ಈ ಪ್ರಯತ್ನವನ್ನು ಮಾಡಲಾಗುವುದು; | ಪ್ಲಾಸ್ಟಿಕ್ ತ್ಯಾಜ್ಯದಿಂದ ಪರಿಸರ ಮತ್ತು ಸಾರ್ವಜನಿಕರ ಆರೋಗ್ಯದ ಮೇಲೆ ಉಂಟಾಗುತ್ತಿರುವ ದುಷ್ಪರಿಣಾಮಗಳನ್ನು ತಡೆಯುವ ಉದ್ದೇಶದಿಂದ ಈಗಾಗಲೇ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ದಿನಾಂಕ: 06.12.2021 ರಂದು ಪ್ಲಾಸ್ಟಿಕ್ ಪ್ಯಾಕೇಜಿಂಗ್ ಗಳಲ್ಲಿ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವ ಸಂಸ್ಥೆಗಳ ಜೊತೆ ಸಭೆಯನ್ನು ನಡೆಸಲಾಗಿದೆ. ಸದರಿ ಸಭೆಯಲ್ಲಿ ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆ, ಸಂಸ್ಕರಣೆ ಮತ್ತು ವಿಲೇವಾರಿ ಮಾಡುವ ಬಗ್ಗೆ ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆ ನಿಯಮಗಳು, 2016 ಹಾಗೂ ಘನ ತ್ಯಾಜ್ಯ ನಿರ್ವಹಣಾ ನಿಯಮಗಳು, 2016ರ ನಿಯಮ 17 ರನ್ವಯ ಸೂಕ್ತ ನಿರ್ದೇಶನಗಳನ್ನು ನೀಡಲಾಗಿರುತ್ತದೆ.<br><br>ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆ ನಿಯಮಗಳು, 2016 ರ ಪ್ರಕಾರ ಪ್ಲಾಸ್ಟಿಕ್ ತ್ಯಾಜ್ಯವನ್ನು ಮರುಬಳಕೆ ಮಾಡುವ ಬಗ್ಗೆ ಈಗಾಗಲೇ ಸ್ಥಳೀಯ ಸಂಸ್ಥೆಗಳಿಗೆ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ವತಿಯಿಂದ |

| | | |
|---|---|---|
| | | ನಿರ್ದೇಶನವನ್ನು ನೀಡಲಾಗಿದೆ.<br><br>ಮುಂದುವರೆದಂತೆ, ಘನ ತ್ಯಾಜ್ಯ ನಿರ್ವಹಣಾ ನಿಯಮಗಳು, 2016ರ ನಿಯಮ 17ರ ಪ್ರಕಾರ ಪ್ಲಾಸ್ಟಿಕ್ ಮತ್ತು ಗಾಜಿನ ಬಾಟಲ್‌ಗಳ ಮೂಲಕ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವ ಕಂಪನಿಗಳು ತ್ಯಾಜ್ಯ ಸಂಸ್ಕರಣಾ ಮತ್ತು ವಿಲೇವಾರಿ ಮಾಡಲು ಸ್ಥಳೀಯ ಸಂಸ್ಥೆಗಳಿಗೆ ಆರ್ಥಿಕ ನೆರವನ್ನು ಒದಗಿಸಲು ಅವಕಾಶವಿರುತ್ತದೆ. ಸದರಿ ನಿಯಮದನ್ವಯ ಸ್ಥಳೀಯ ಸಂಸ್ಥೆಗಳು ಕಂಪನಿಗಳ ಜೊತೆಗೂಡಿ ಪ್ಲಾಸ್ಟಿಕ್ ಮತ್ತು ಗಾಜಿನ ಬಾಟಲ್‌ಗಳ ತ್ಯಾಜ್ಯವನ್ನು ಸೂಕ್ತವಾಗಿ ವಿಲೇವಾರಿ ಮಾಡಲು ಅವಕಾಶವಿರುತ್ತದೆ.<br><br>ಅಲ್ಲದೇ, ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಸಚಿವಾಲಯವು ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣಾ ನಿಯಮಗಳು, 2016 ರ ಅಡಿಯಲ್ಲಿ ಪ್ಲಾಸ್ಟಿಕ್ ಪ್ಯಾಕೇಜಿಂಗ್‌ಗಾಗಿ ವಿಸ್ತೃತ ಉತ್ಪಾದಕರ ಜವಾಬ್ದಾರಿಯ (EPR) ಕರಡು ನಿಬಂಧನೆಗಳನ್ನು ಕಾಲಕಾಲಕ್ಕೆ ತಿದ್ದುಪಡಿ ಮಾಡಿದಂತೆ, ಸಾರ್ವಜನಿಕ ಸಮಾಲೋಚನೆಗಾಗಿ ಅಕ್ಟೋಬರ್ 6, 2021 ರಂದು ಭಾರತದ ಗೆಜೆಟ್ ನಲ್ಲಿ ಜಿಎಸ್‌ಆರ್ ಸಂಖ್ಯೆ 722 (ಇ) ಗೆ ಸೂಚಿಸಿದೆ.<br><br>ಕರಡು ಅಧಿಸೂಚನೆಯ ಪ್ರಕಾರ, ಉತ್ಪಾದಕ, ಆಮದುದಾರರು ಮತ್ತು ಬ್ರಾಂಡ್-ಮಾಲೀಕರು ಕ್ರಮವಾಗಿ ವಿಸ್ತೃತ ಉತ್ಪಾದಕ ಜವಾಬ್ದಾರಿಯ ಅಡಿಯಲ್ಲಿ ಸಂಗ್ರಹಿಸಲಾದ ಪ್ಲಾಸ್ಟಿಕ್ ಪ್ಯಾಕೇಜಿಂಗ್ ತ್ಯಾಜ್ಯದ ಕನಿಷ್ಠ ಮಟ್ಟದ ಮರುಬಳಕೆಯನ್ನು (ಜೀವ ವಿಲೇವಾರಿಯ ಅಂತ್ಯವನ್ನು ಹೊರತುಪಡಿಸಿ) ಖಚಿತಪಡಿಸಿಕೊಳ್ಳಬೇಕು. ಕರಡು ಅಧಿಸೂಚನೆಯಲ್ಲಿ ಉತ್ಪಾದಕರು, ಆಮದುದಾರರು ಮತ್ತು ಬ್ರಾಂಡ್ ಮಾಲೀಕರಿಗೆ ವಿಸ್ತೃತ ಉತ್ಪಾದಕ ಜವಾಬ್ದಾರಿಯ ಅಡಿಯಲ್ಲಿ ಸಂಗ್ರಹಿಸಲಾದ ಪ್ಲಾಸ್ಟಿಕ್ ಪ್ಯಾಕೇಜಿಂಗ್ ತ್ಯಾಜ್ಯದ ಕನಿಷ್ಠ ಮಟ್ಟದ ಮರುಬಳಕೆಯ ಜಾರಿಗೊಳಿಸಬಹುದಾದ ಸಲಹೆಯು ಪ್ಲಾಸ್ಟಿಕ್ |

| | | |
|---|---|---|
| | | ಪ್ಯಾಕೇಜಿಂಗ್ ತ್ಯಾಜ್ಯದ ವೃತ್ತಾಕಾರದ ಆರ್ಥಿಕತೆಯನ್ನು ಮತ್ತಷ್ಟು ಬಲಪಡಿಸುತ್ತದೆ ಮತ್ತು ಪ್ಲಾಸ್ಟಿಕ್ ತ್ಯಾಜ್ಯದ ವೈಜ್ಞಾನಿಕ ಮರುಬಳಕೆಯನ್ನು ಪ್ರೋತ್ಸಾಹಿಸುತ್ತದೆ. |
| (ಇ) | 4–5 ವರ್ಷಗಳಿಂದ ಮದ್ಯದ ಖಾಲಿ ಬಾಟಲಿಗಳಿಗೆ 1 & 2 ರೂ. ನಂತೆ ಅಂಗಡಿಗಳಲ್ಲಿ ಮರುಬಳಕೆಗೆ ವಾಪಸ್ ಪಡೆಯುತ್ತಿದ್ದು, ಇತ್ತೀಚೆಗೆ ವಾಪಸ್ ಪಡೆಯದಿರಲು ಕಾರಣವೇನು; ಇವನ್ನು ಮರುಬಳಕೆ ಮಾಡುವಂತೆ ಮದ್ಯ ತಯಾರಿಸುವ ಕಂಪನಿಗಳಿಗೆ ಸರ್ಕಾರ ಆದೇಶಿಸಬಹುದಲ್ಲವೆ; ರೈತರ ಸಾಗುವಳಿ ಭೂಮಿಯನ್ನು ಮತ್ತು ಪರಿಸರವನ್ನು ಕಾಪಾಡುವ ಕಾಳಜಿ ಮತ್ತು ಆಸಕ್ತಿ ಸರ್ಕಾರಕ್ಕಿಲ್ಲವೆ; | ಇತ್ತೀಚಿನ ದಿನಗಳಲ್ಲಿ ಲಿಕ್ಕರ್ ಉದ್ಯಮದಲ್ಲಿ ಮದ್ಯವನು ಪ್ಯಾಕಿಂಗ್ ಮಾಡಲು ಗಾಜಿನ ಬಾಟಲಿಗಳ ಬಳಕೆ ಕಡಿಮೆ ಆಗುತ್ತಿದೆ. ಡಿಸ್ಟಿಲರಿಗಳು ಮದ್ಯದ ಪ್ಯಾಕಿಂಗ್ ಮಾಡಲು ಗಾಜಿನ ಬಾಟಲಿಗಳ ಬದಲಿಗೆ ಅಸೆಪ್ಟಿಕ್ ಪ್ಯಾಕ್, ಟೆಟ್ರಾ ಪ್ಯಾಕ್, ಪೆಟ್ ಬಾಟಲುಗಳು, ಸ್ಟ್ಯಾಂಡಿ ಪೌಚ್, ಪಾಲಿ ಪೌಚ್, ಪಿಲ್ಲೋ ಪೌಚ್ ಮತ್ತು ಲ್ಯಾಮಿನೇಟೆಡ್ ಪಾಲಿ ಪೌಚ್‌ಗಳಂತಹ ವಿವಿಧ ರೀತಿಯ ಪ್ಯಾಕೇಜಿಂಗ್ ಮೆಟಿರಿಯಲ್‌ಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸುತ್ತಿದ್ದು, ಮಾರುಕಟ್ಟೆಯಲ್ಲಿ ಇಂತಹ ಪ್ಯಾಕೇಜಿಂಗ್ ಮೆಟಿರಿಯಲ್‌ಗಳಿಗೆ ಬೇಡಿಕೆ ಹೆಚ್ಚುತ್ತಿದೆ. ಗಾಜಿನ ಬಾಟಲಿಗಳು ಒಡೆಯುವ ಸಾಧ್ಯತೆ ಹೆಚ್ಚಿರುವುದರಿಂದ ಮದ್ಯದ ಖಾಲಿ ಬಾಟಲಿಗಳಿಗೆ ಅಂಗಡಿಗಳಲ್ಲಿ ಮರುಬಳಕೆಗೆ ವಾಪಸ್ ಪಡೆಯುವ ಪ್ರಮಾಣ ಕಡಿಮೆಯಾಗುತ್ತಿದೆ. ಅಲ್ಲದೇ, ಡಿಸ್ಟಿಲರಿಗಳು ಮಾರುಕಟ್ಟೆಯ ಬೇಡಿಕೆ ಹಾಗೂ ಅವರ ಅವಶ್ಯಕತೆಗನುಗುಣವಾಗಿ ಬಾಟಲಿಗಳ ವಿನ್ಯಾಸವನ್ನು ಆಗಿಂದಾಗ್ಗೆ ಬದಲಿಸುತ್ತಿದ್ದು, ಗುಣಮಟ್ಟದ ದೃಷ್ಟಿಯಿಂದಲೂ ಸಹ ಹಳೆ ಬಾಟಲಿಗಳ ಬದಲಿಗೆ ಹೊಸ ಗಾಜಿನ ಬಾಟಲಿಗಳ ಖರೀದಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿರುವುದರಿಂದ, ಇದು ಕೂಡ ಖಾಲಿ ಗಾಜಿನ ಮದ್ಯದ ಬಾಟಲಿಗಳ ಮರುಬಳಕೆ ಕಡಿಮೆ ಆಗಲು ಒಂದು ಕಾರಣವಾಗಿದೆ.<br><br>ಆದಾಗ್ಯೂ, ಕೆಲವು ಬ್ರೀವರಿಗಳು ಹಾನಿ ಆಗದೆ ಇರುವ ಖಾಲಿ ಗಾಜಿನ ಬಿಯರ್ ಬಾಟಲುಗಳನ್ನು ಬಾಟಲ್ ಡೀಲರ್‌ಗಳಿಂದ ಪಡೆಯುತ್ತಿದ್ದು, ಖಾಲಿ ಬಿಯರ್ ಬಾಟಲುಗಳು ಸ್ವಲ್ಪ ಮಟ್ಟಿಗೆ ಮರುಬಳಕೆ ಆಗುತ್ತಿವೆ. ಬ್ರೀವರಿಗಳು ಕೂಡ ಮಾರುಕಟ್ಟೆಯ ಬೇಡಿಕೆ, ಗುಣಮಟ್ಟದ ದೃಷ್ಟಿಯಿಂದ ಹಾಗೂ ಅವರ ಅವಶ್ಯಕತೆಗನುಗುಣವಾಗಿ ಹೊಸ ಗಾಜಿನ ಬಾಟಲಿಗಳ |

| | | |
|---|---|---|
| | | ಖರೀದಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿರುವುದರಿಂದ, ಇದು ಕೂಡ ಖಾಲಿ ಗಾಜಿನ ಬಿಯರ್ ಬಾಟಲಿಗಳ ಮರುಬಳಕೆ ಕಡಿಮೆ ಆಗಲು ಒಂದು ಕಾರಣವಾಗಿದೆ. |
| (ಈ) | ಸರ್ಕಾರಕ್ಕೆ ರೈತರ ಹಾಗೂ ರೈತರ ಭೂಮಿ ಬಗ್ಗೆ ಮತ್ತು ಪರಿಸರದ ಬಗ್ಗೆ ಕಾಳಜಿ ಇದ್ದರೆ ಮದ್ಯದ ಖಾಲಿ ಬಾಟಲಿಗಳನ್ನು ಕಡಿಮೆ ಹಣಕ್ಕೆ ಕೊಂಡುಕೊಂಡು ಮರುಬಳಕೆ ಮಾಡಿಕೊಳ್ಳಲು ಕಾನೂನು ಕ್ರಮವನ್ನು ಯಾವ ಕಾಲ ಮಿತಿಯೊಳಗೆ ತೆಗೆದುಕೊಳ್ಳಲಿದೆ; ಇನ್ನೂ ಯಾವ ಯಾವ ಮಾರ್ಗಗಳಿಂದ ಈ ತ್ಯಾಜ್ಯ ಪದಾರ್ಥವನ್ನು ನಿಯಂತ್ರಿಸಲು ಸರ್ಕಾರ ಕ್ರಮ ಕೈಗೊಂಡಿದೆಯೇ? (ವಿವರಿಸುವುದು) | ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ಗಾಜಿನ ತ್ಯಾಜ್ಯಗಳನ್ನು ಮರುಬಳಕೆ ಮಾಡುವ ಯಾವುದೇ ಅಧಿಕೃತ ಗಾಜಿನ ತ್ಯಾಜ್ಯದ ಮರುಬಳಕೆ ಘಟಕಗಳು ಇರುವುದಿಲ್ಲ.<br><br>ಘನ ತ್ಯಾಜ್ಯ ನಿರ್ವಹಣಾ ನಿಯಮಗಳು, 2016ರ ನಿಯಮ 17ರ ಪ್ರಕಾರ ಪ್ಲಾಸ್ಟಿಕ್ ಮತ್ತು ಗಾಜಿನ ಬಾಟಲ್‌ಗಳ ಮೂಲಕ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವ ಕಂಪನಿಗಳು ತ್ಯಾಜ್ಯ ಸಂಸ್ಕರಣಾ ಮತ್ತು ವಿಲೇವಾರಿ ಮಾಡಲು ಸ್ಥಳೀಯ ಸಂಸ್ಥೆಗಳಿಗೆ ಆರ್ಥಿಕ ನೆರವನ್ನು ಒದಗಿಸಲು ಅವಕಾಶವಿರುತ್ತದೆ. ಸದರಿ ನಿಯಮದನ್ವಯ ಸ್ಥಳೀಯ ಸಂಸ್ಥೆಗಳಾದ ಗ್ರಾಮ ಪಂಚಾಯಿತಿ ಮತ್ತು ನಗರ ಸ್ಥಳೀಯ ಕಂಪನಿಗಳ ಜೊತೆಗೂಡಿ ಪ್ಲಾಸ್ಟಿಕ್ ಮತ್ತು ಗಾಜಿನ ಬಾಟಲ್‌ಗಳ ತ್ಯಾಜ್ಯವನ್ನು ಸೂಕ್ತವಾಗಿ ವಿಲೇವಾರಿ ಮಾಡಲು ಅವಕಾಶವಿರುತ್ತದೆ. |

**ಸಂಖ್ಯೆ:** ಅಪಜೀ 86 ಇಎನ್‌ಜಿ 2021

(ಆನಂದ್ ಸಿಂಗ್)
ಪ್ರವಾಸೋದ್ಯಮ ಹಾಗೂ
ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.